ಒಂದಾಣೆ ಮಾಲೆ 263

# ವೀರ ಮಕರಾಕ್ಷ

## (ಯಕ್ಷಗಾನ ಪ್ರಸಂಗ)




ರಚಯಿತರು:

ಶ್ರೀ ಅಡೂರು ಬಳಕಿಲ ವಿಷ್ಣಯ್ಯ.





1959

ಬೆಲೆ: ೧ ಆಣೆ.

ಒಂದಾಣೆ ಮಾಲೆ — ಮಂಗಳೂರು.

## ಪ್ರತಿ ವಾರವೂ ಕೊಂಡುಕೊಳ್ಳಿರಿ!

“ಒಂದಾಣೆ ಮಾಲೆ”ಯ ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1959ನೇ ಡಿಶಂಬರ ತಿಂಗಳ ನಾಲ್ಕನೆಯ ವಾರದ ವರೆಗೆ 263 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕವು ಹೊರಡುತ್ತಲೇ ಇದೆ.

263 ಆಣೆಗಳಿಗೆ ‘ಒಂದಾಣೆ ಮಾಲೆ’ಯು, ಹೊದಿಕೆ ಕೂಡಿ, ಒಟ್ಟು 5014 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ ‘ಒಂದಾಣೆ ಮಾಲೆ’ಗೆ ಬರೆಯುತ್ತಾರೆ. ‘ಅಶ್ಲೀಲ’ ಎಂಬ ಅಂಶವೇ ‘ಒಂದಾಣೆ ಮಾಲೆ’ಯ ಪ್ರಕಟಣೆಗಳಲ್ಲಿರುವುದಿಲ್ಲ.

‘ಒಂದಾಣೆ ಮಾಲೆ’ ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

‘ಒಂದಾಣೆ ಮಾಲೆ’ ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ—ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS, CAR STREET, MANGALORE-1.

॥ ಶ್ರೀ ಶುಭಮಸ್ತು ॥

# ವೀರ ಮಕರಾಕ್ಷ

(ಯಕ್ಷಗಾನ ಪ್ರಸಂಗ)

## ಪಾತ್ರವರ್ಗ:

1. ಶ್ರೀರಾಮ. 2. ರಾವಣ. 3. ಮಕರಾಕ್ಷ. 4. ಸಾರಥಿ. 5. ವಿಭೀಷಣ (ಹೀಗೆ ಪಂಚಪಾತ್ರ).

॥ ಭಾಮಿನಿ ॥

ಆದಿಕವಿ ವಾಲ್ಮೀಕಿ ಮುನಿ ರವಿ । ಯಾದಿ ನವಗ್ರಹರಡಿಗೆ ವಂದಿಸಿ । ಮಾಧವನ ಸಂಸ್ತುತಿಸಿ ಭಕ್ತಿಯೊಳೆರಗಿ ಭಾರತಿಯಾ ॥ ಆದಿಮಾಯಾ ಶೀಶೆ ನಿರುಪಮ । ವೇದನುತೆ ದುರ್ಗಾಂಬಿಕೆಯು ದ್ವಯ । ಪಾದಕಾನತನಾಗಿ ವರ್ಣಿಪೆನೀ ಮಹಾಕಥೆಯಾ ॥ ೧ ॥

॥ ರಾಗ: ಸೌರಾಷ್ಟ್ರ; ತ್ರಿವುಡೆ ॥

ಭಾನುಕುಲಭವರಾದ ಕುಶಲವ । ಸೂನುಗಳು ವಾಲ್ಮೀಕಿ ಮುನಿಪಗೆ। ಸಾನುರಾಗದಿ ನಮಿಸುತೆಂದರು । ಮೌನಿ ಕೇಳೈ ॥ ೧ ॥ ವೀರ ಮಕರಾಕ್ಷನನು ಸಂಗರ । ಧಾರುಣಿಯೊಳೆಚ್ಚಾಡಿ ಮಡುಹಿದ । ಧೀರರ್ಯಾರೆಂದೆನುವ ದನುದಯ । ದೋರಿ ತಿಳುಹೈ ॥ ೨ ॥ ಎಂದು ಭಕ್ತಿಯೊಳೆರಗಿದಣುಗರ । ಕಂಧರವ ಪಿಡಿದೆತ್ತಿ ಮುನಿಪತಿ । ಯಿಂದಿರಾಧವನಡಿಯ ನೆನದಿಂ । ತೆಂದ ಕಥೆಯಾ ॥ ೩ ॥

॥ ಭಾಮಿನಿ ॥

ಲವನೆ ಕೇಳ್ ರಾವಣನ ತನುಸಂ । ಭವರೊಳತಿ ಧಾರ್ಮಿಕನು ಕಲಿ ವೈ । ಷ್ಣವ ಶಿರೋಮಣಿಯೆನಿಸುವತಿಕಾಯನನು ಲಕ್ಷ್ಮಣನೂ ॥ ಹವದಿ ಮರ್ದಿಸಿ ಮೆರೆಯುತಿಹ ಜಯ । ಯುವತಿಯನು ತಂದೊಪ್ಪಿಸಿದ ಸಹ । ಭವನ ಬಿಗಿಯಪ್ಪುತ್ತ ಮನ್ನಿಸುತೆಂದ ರಾಘವನು ॥ ೧ ॥

॥ ರಾಗ: ಕೇದಾರ ಗೌಳ; ಅಷ್ಟ ॥

ಹನುಮಂತಂಗದ ಸೂರ್ಯತನುಜ ವಿಭೀಷಣರೆನುವದ ಕೇಳಿರಿನ್ನು । ವನಿತೆಗಾಗಿಯೆ ಕೆಟ್ಟ ದನುಜರಿಂದಲಿ ಕಾದಿ । ದಣಿದಿರಿ ಪೇಳಲೇನು ॥ ೧ ॥ ಅತಿಕಾಯನನು ತಮ್ಮ ಹತಿಸಿದರಿಂದೆನು । ಗತಿಹಿತ ಮನದೊಳ್ಳಿತು । ದಿತಿಜರ ನಿವಹವ ಮತಿಶೂನ್ಯದಶಕಂಠ । ಮಥಿಸುವ ಸ್ವಾತಕಿಂತು ॥ ೨ ॥ ನೀತಿಯೊರೆದನೆಂಬ ಖಾತಿಯಿಂದಟ್ಟಿದ । ಸೋದರ ವಿಭೀಷಣನಾ । ಯಾತು ದಾನವರೊಳಂತ್ಯಾತಕುದ್ಭವಿಸಿದ । ಪಾತಕಿಯುಹ ರಾವಣ ॥ ೩ ॥ ಮಂದ ಮತಿಯು ನೀಗಿ ಸಂಧಿಗಾದರು ಬಹ । ನೆಂದೆಂಬ ಭಾವದೊಳು । ಇಂದ್ರ ಪೌತ್ರನು ದಶಕಂಧರನೆಡೆಗೈದಿ । ಬಂದನು ವೈರದೊಳು ॥ ೪ ॥ ದಶಕಂಠ ಗವಸಾನವೆಸಗುವ ತನಕ ಸಂತಸವಿಲ್ಲ ನೋಡಲಿನ್ನು । ಅಸಮ ವಿಕ್ರಮ ರೆಲ್ಲರೊಸಗೆಯೊಳಿಹುದೆಂದು । ಉಸುರಿದ ಶ್ರೀರಾಮನು ॥ ೫ ॥

॥ ಭಾಮಿನಿ ॥

ಕುಶಲವರು ಕೇಳಿತ್ತಲಾಮಹ । ದ'ಗಳನು ಹವದೆಣಿಕೆಯಿಂದಲಿ । ಪಶುಪತಿಯುನರ್ಜಸುತ ಬಂದೋಲಗದೊಳೆಸದಿರಲು ॥ ಅಸಮಬಲನತಿ ಕಾಯನಾಹವ । ವಸುಧೆಯಲಿ ಲಕ್ಷ್ಮಣನ ಶರಹತಿ । ಗಳುವ ನೀಗಿದು ದರಿತು ಚಿಂತಿಸುತೆಂದ ಬೆರಗಿನೊಳು ॥ ೧ ॥

॥ ರಾಗ: ನಾದನಾಮಕ್ರಿಯೆ; ಅಷ್ಟ ॥

ಆದಿ ದೇವತೆ ಸೀತೆ ನೆವದಿಂದಾ । ಯೆನ್ನ । ಸೋದರಿಗೊದಗಿತು ನಿರ್ಬಂಧ । ಮೋದಿಸಿಜೆಯ ತಂದು ವನದಿಂದಾ । ಸೋಲ । ವಾದುದೀವರೆಗೆ ಸಂಗರದಂದಾ ॥ ೧ ॥ ಸೋದರರೀರ್ವರ ಕಳೆದೆನು । ಪೋರ್ವ । ನೈದಿ ಸೇರಿದ ವೈರಿ ಬಲವನು । ಕಾದಿ ತಾನಳಿದ ನಿನ್ನೋರ್ವನು । ಗೌ । ರೀಧವ ಮರಶನೆಯೆನ್ನನು ॥ ೨ ॥ ಅತಿಕಾಯನ್ಯೆದೆ ಸಂಗರಕತ್ತಾ । ಧೈರ್ಯ । ಮತಿಯುತನಾಗಿದ್ದೆ ನಾನಿತ್ತಾಂ । ಮೃತಿಯಾದನೆಂಬುದ ತಿಳಿಯುತ್ತಾ । ಮುಂದೆ । ಗತಿಯೇನೆಂದರಿಯೆ ಮುಂದಿನ ಪಥಾ ॥ ೩ ॥ ಛಲದಂಕ ದಶಕಂಠನಾಗಿನ್ನು । ಯುದ್ಧ । ಕಳುಕಿ ನಿಂದರೆ ಕೀರ್ತಿಯುಹುದೇನು । ಇಳೆವೆ ನಿಂದಿಸಲಿ ಸಂಗರಕಾನು । ವೈರಿ । ಬಲವನುಗರಿದು ತಾಗೆಲು ವೆನು ॥ ೪ ॥ ರಾಮಲಕ್ಷ್ಮಣರೆಂಬ ನರರನು । ನಿ । ಸ್ಸಾರ್ವಮವ[illegible]ಸಗಿಸಿ

ಜಯವನು । ಹೇ ಮಹೇಶನೆ ಕರುಣಿಸು ನೀನು । ಎಂದು । ತಾಮಸಿ ಚರ ಕೆಯ್ಯ ಮುಗಿದನು ॥ ೫ ॥

॥ ಭಾಮಿನಿ ॥

ಎಂದೆನುತ ದಶಮುಖನು ಪೊರಮಡು । ವಂದವನು ತಿಳಿಯುತ್ತಲಾ ಖರ । ನಂದನನು ಮಕರಾಕ್ಷನತಿಜವದಿಂದ ಪೊರಮಡುತಾ ॥ ಬಂದು ಸಭೆಯೊಳಗೆಸದಿರುವ ದಶ । ಕಂಧರನ ಮೊಗ ನೋಡಿ ನಸುನಗೆ । ಯಿಂದ ಲಭಿನಮಿಸುತ್ತಲೆಂದನು ಕರವ ಜೋಡಿಸುತಾ ॥ ೧ ॥

॥ ರಾಗ: ಸೌರಾಷ್ಟ್ರ; ತ್ರಿವುಡೆ ॥

ದೇವರಿಪು ಚಿತ್ತೈಸು ನುಡಿಯುವಿ । ಭಾವಸುವ ಸ್ವಭರ್ಗನು ತುಡು ಕಿದ । ಭಾವದುದಯ ವಿದೇನು ಮೊಗದ ಸ್ವ । ಭಾವವಿಂದು ॥ ೧ ॥ ನಳಿನ ಸಖವಂಶಾಧಿಪನ ನಿಜ । ನಳಿನಮುಖಿ ಸೀತೆಯನು ತಂದಿಹೆ । ನಳಿವಿಯಲಿ ಕೆಲರಳಿದುದೇಕಲೆ । ತಿಳುಹಲೇನು ॥ ೨ ॥ ಎಣಿಕೆಯಿಲ್ಲದ ಸುಜತಿಯರ ತಿಂ । ದಿಣಿಯು ನಿನಗಿರಲನ್ಯನಾರೀ । ಮಣಿಯ ತಂದುದೆ ಚೋದ್ಯವಿಂದಿಗೆ। ದಣಿಯಲ್ಯಾತೆ ॥ ೩ ॥ ಜನಕಜೆಯ ವೈವಾಹದೊಳು ನಾ । ಧನುನೆಗಹ ಲಪಹಾಸ್ಯಗೈದಿಹ । ವನಿತೆಯನು ಘಣವಿಟ್ಟುತಂದಿಹೆ । ಘನತೆಯಿಂದಾ ॥ ೪ ॥ ಕಳೆದ ಕಾರ್ಯವನುಸುರಿ ಫಲವೇ । ನಳಿದವರದಂತಿರಲಿ ಸೀತೆಯ । ನಿಳಿಸ ದಿಹುದೇ ಕುಲದ ಕೀರ್ತಿಯ । ತಿಲಕವೆಮಗೆ ॥ ೫ ॥

॥ ಭಾಮಿನಿ ॥

ಅಂದರೆಲೆ ಮಕರಾಕ್ಷ ಮನದಲಿ । ಬಂಧಿಸಿದ ಛಲ ಬಿಡೆನು ಸೋದರ । ಕಂದರಳಿವಂತಿರಲಿ ಕೇಳ್ನನ್ನಯ್ಯನನು ರಣದಿ ॥ ಕೊಂದವನ ಸೆರೆ ಕೊಲುವ ದೊಂದೇ । ಹೊಂದಿಹುದು ದೃಢವೆನ್ನ ಚಿತ್ತದೊ । ಳೆಂದೆನಲು ಮಕರಾಕ್ಷ ಯೋಚಿಸುತೆಂದನತಿಭರದಿ ॥ ೧ ॥

॥ ರಾಗ: ಕಾಂಭೋದಿ; ಝಂಪೆ ॥

ಆದರೆಲೆ ಹಿರಿಜನಕ ವಾದವಿಡದ್ಯೆದುವೆನು । ಯೋಧನಾಗಿಹ ಯೆಮ್ಮ ಪಿತನಾ ॥ ಛೇದಿಸಿದ ಹಗೆಯಗ್ನಿ ಭೇಧಿಸುತಲಿದೆ ಮನವ । ಹೇ ದಯಾನಿಧಿ ಕಳುಹುಯೆನ್ನಾ ॥೧॥ ಎನಗಾಗಿ ನೀನೆ ರಿಪುವನಧಿಯೊಳು ಘುಮ್ಮಿಕ್ಕಿ । ದಣಿಯಲೇಕಿಂದು ಸಮರದಲಿ ॥ ಘನವಿಕ್ರಮದೊಳ್ಳೆದಿ ಸೆಣಸಾಡುವವ

ರಿಹರು । ಕುಣಿವರಿಯೆನೆನಲೆಂದ ಕನಲಿ ॥ ೨ ॥ ಎನ್ನ ಪಿತನಳಿದ ಮೇಲೆನ್ನ ಪುತ್ರನ ತೆರದಿ । ಮನ್ನಿಸುತ ಪೊರದಾತ ನೀನು ॥ ನಿನ್ನ ಕಷ್ಟಕೆ ಪೋಗದಿನ್ನುಳಿವ ಸುತನೆ । ತಾನೆನ್ನಲಿಂತೆಂದ ದಶಮುಖನು ॥ ೩ ॥ ಮಗನೆ ನಿನಗನಿತು ಛಲ । ಮಿಗುವರಿಪುಶೀರ್ದಣಾ । ಹಗೆಗಳನು ಗೆಲುಪೋಗಿ ರಣದಿ ॥ ವ್ಯಾಘ್ರಧರನು ನಿನಗೆ ಜಯ ತೆಗದೀಯಲೆಂದೆನುತ । ಬಿಗಿಯಪ್ಪಿ ಕಳುಹಿದನು ಮುದದಿ ॥ ೪ ॥

॥ ಭಾಮಿನಿ ॥

ಮಣಿದು ದಶಮುಖನಡಿಗೆ ಖಳ ತಾಂ । ಧಣಿಯನೆರಹುತ್ತೊಡನೆ ಸೂತಗೆ । ಮಣಿದು ಪಾರುಹಕೆರಗಿ ಧನುಶರವಾಂತು ಹಸ್ತದಲಿ ॥ ಕುಣಿಯುತಿಹ ಸ್ವಾರಿಯರ ಘೋಷದಿ । ಮಣಿರಥಕೆ ಬಲಿಬಂದು ಯೆಳೆದಿನ । ಮಣಿಯುವೋಲ್ ಮಕರಾಕ್ಷ ರಥವೇರಿದನು ಬಲುಹಿನಲಿ ॥ ೧ ॥

॥ ರಾಗ: ಕಾಂಭೋದಿ; ಝಂಪೆ ॥

ಎಲವೊ ಸಾರಥಿಯೆನ್ನ ಕಲಹದ ಕಠೋರತನ । ವಿಳಸದಾದುದೆ ಮಹಾಕದನಾ ॥ ನಳಿನಸಖವಂಶಜನ । ಸುಳಿವರಿಯೆ ನೀ ಹದನ । ತಿಳಿದು ಕಾಣಿಸಲು ಬೇಕವನಾ ॥ ೧ ॥ ಎನ್ನ ತಾತನ ಕೊಂದ ದುರ್ನೀತಿಯುತನವನ । ನಿರ್ನಾಮವೆಸಗುವದೆ ಕಥನಾ । ಉನ್ನಿ ಕಪಿಗಳ ಕದನದುನ್ನತಿಕೆಗಿಲ್ಲಮನ । ಮುನ್ನ ಹಾರಿಸು ರಥವ ಜತನಾ ॥ ೨ ॥ ಭಳರೆ ಮಕರಾಕ್ಷ ಮನವಳುಕದಿರು ರಾಘವನ । ತಿಳುಹುವೆನು ಪರಿಕಿಪುದು ಮುನ್ನಾ ॥ ಅಳುಕದಿರು ನೋಡಿ ಗುಣ ತಿಳಿದು ಮಾತಾಡವನ । ಕಳುಹು ಕರ್ಗಣೆಯಿದುವೆ ಹದನಾ ॥ ೩ ॥

॥ ಭಾಮಿನಿ ॥

ನಿಂದನಾ ನಿಜ ಸಕಲ ಸೇನೆಯ । ಮುಂದುಗಡೆಯಲಿ ಮೆರೆವ ತಾರಕ । ವೃಂದಮಧ್ಯದ ಶಶಿಯವೋಲ್ ರಥದೊಳಗೆ ಮಕರಾಕ್ಷ ॥ ಹಿಂದಣದ ರಕ್ಕಸರಿಗಿವ ಹ । ನ್ನೊಂದುಮಡಿ ಕಾಣಿಸಲು ದಶರಥ । ನಂದನನು ನಿಜ ಚರಣಕಮಲಾರಾಧಕನೊಳೆಂದ ॥ ೧ ॥

॥ ರಾಗ: ಸುರುಟಿ; ಯೇಕ ॥

ಯೇನಿದೇನಿದು ಶರಣ । ಚೋದ್ಯವಿ । ದೇನು ನವೀನತನಾ । ಸೇನೆಯ ಮಧ್ಯತಿ ಭಾನುಪ್ರಕಾಶದಿ । ಕಾಣಿಸುತಿಹ ಮಹದಾನವನಾರೈ

॥ ೧ ॥ ಯೋ ॥ ದುರಿತಾತ್ಮನೆ ಯಿವನು । ಸದ್ಗುಣ । ಭರಿತನೆ ನಿಶಿಚರನು । ದೊರೆ ನಿನ್ನಣ್ಣನ ನೆರವಿಯೊಳೀತನು । ಪುರುಳನೆ ಸತ್ವನೆ ವರೆಯುವನೊಳವನು ॥ ಯೋ ॥ ೨ ॥ ಇನಿತೀವರೆಗೈದಿ । ಮಡಿದಿಹ । ದನುಜರ ಸೈನಿಕದಿ । ರಣಕಿದಿರಾಹನೆ ಯೆಣೆ ಇವಗ್ಯಾರೆನೆ ॥ ಮಣಿದು ಶರಣ ನುಡಿದನು ಘನತವಕದಿ ॥ ಯೋ ॥ ೩ ॥

॥ ರಾಗ: ಸಂಗಾತ್ಯ; ರೂಪಕ ॥

ಚಿತ್ತವಿಸೈ ರಾಮ ಕೃತ್ರಿಮದೊಳು ಬಂದ । ಧೂರ್ತೆಯಾಗಿಹ ಶೂರ್ಪನಖಿಯಾ ॥ ಮತ್ತತ್ವವನು ಕೇಳಿ ಶತ್ರುವಾಗಿಯೆ ಬಂದ । ದೈತ್ಯನಾಗಿಹ ಖಂತನಯಾ ॥ ೧ ॥ ಭರಿತವಿಕ್ರಮನಾಗಿ ಮೆರವ ನಮ್ಮಸುರರ । ನರವಿಯೊಳತಿಯೋಗ್ಯನೆಂದು ॥ ದುರಿತಾತ್ಮನಲ್ಲಾ ಶಂಕರನಿಗಂಜುವನಲ್ಲಾ । ಕರೆವರು ಮಾರಾಕ್ಷನೆಂದು ॥ ೨ ॥ ಖರದೂಷಣಾದ್ಯರ ತರಿದ ಮೇಲಿವನು ಬಂ । ದೆರಗಿದನೆಂನ್ನಣನಡಿಯಾ ॥ ಪೊರವುತ್ತಲೀರ್ದನಿಂದರಿಯಾಗಿ ಬಂದಿಹ । ನುರುಸತ್ವಯುತನು ಕೇಳಯ್ಯಾ ॥ ೩ ॥ ಕಲಹ ಕಂಜುವನಲ್ಲ ಮುಳಿದೀತನೊಳು ಕಾದಿ । ಗೆಲುವವನ್ಯಾರಿಂದೇನೆನಲಿ ॥ ನಳನೀಲಹನುಮರಿಂದಲಿ ಜೈಸಲಳವಲ್ಲ । ತಿಳಿದುದನೊರೆದೆ ನಿನ್ನಲ್ಲಿ ॥ ೪ ॥

॥ ಕಂದಪದ್ಯ ॥

ಶರಣನ ನುಡಿಯಂ ಕೇಳುತ । ಲರಿಯಂ ಗೆಲಲೈದುವೆ ತಾನೀಗಲೆ ನೀನೆ । ಲ್ಲರು ಪೋರಡದಿರೆಂದಾ ರಘು । ವರಖಿದಿರಾಗಲು ಸೂತನೊಳರಿದಿಂತೆಂದಂ ॥ ೧ ॥

॥ ರಾಗ: ಸೌರಾಷ್ಟ್ರ; ತ್ರಿವುಡೆ ॥

ನೀನೆ ದಶರಥ ಸಾರ್ವಭೌಮನ । ಸೂನುಗಳೊಳಗ್ರಜನು ಸೀತಾ । ಮಾನಿಯು ನೀಗಾಡಿ ಬಂದಿಹ । ಮಾನಖಿಧಿಯು ॥ ೧ ॥ ಮಾನಿನಿಯು ನೀಗಾಡಿದಲ್ಲಿ ದ । ಶಾನನನು ಕೊಂಡೊಯ್ದ ನಾತನ । ಹಾನಿಯೆಸಗಲು ಬಂಧೆ ಬಂದಪ । ಮಾನ ಕಳೆಯೋ ॥ ೨ ॥ ಹರವಿರಿಂಚಾದಿಗಳಗಂಜದ । ಹಿರಿಜನಕದಶಕಂಠನೊಳು ಹಗೆ । ವೆರಸಿ ನೀನುಳಿದೀರ್ದಡಕ್ಕೆವೆ ! ತರುಣಿಯಾಸೆ ॥ ೩ ॥ ಘೋರನಹ ದಶಕಂಠನೈದಿಹ । ನಾರಿಯನು ಬಿಡಿಸುವುದೆ ಧರ್ಮದ । ಪಾರಮಾರ್ಥತೆ ಯೆನಗೆ ಮರಣವಿ । ಚಾರವಿಲ್ಲ ॥ ೪ ॥

ಭೂತಳಾಧಿಪನೆನಿಸಿಯುಗಲಿದ । ಸೀತೆಯೊಳಸೂಯ್ಯುವರೆ ಹುಲುಕಪಿ ।
ವ್ರಾತವನ್ನೊಡಗೂಡಿಬಂದುದು । ನೀತಿಯುಹುದೆ ॥ ೫ ॥ ನೀತಿಬಾಹಿರ
ರಾಗಿ ಚರಿಸುವ । ಯಾತುದಾನವರ ಪಿಡಿದು ಮಥಿಸಲು । ಕೋತಿಗಳಿ
ಲೇಸೆಂದು ನೆರಹಿ । ನೋತು ಇವರಾ ॥ ೬ ॥ ಭರಿತವಿಕ್ರಮನೆನಿಸಿ
ಮೆರದಿಹ । ನಿರಪರಾಧಿಯು ವಾಲಿಯೆಂಬನ । ಧುರದಮಧ್ಯದೊಳಿರಿಯ
ದಂದದಿ । ತರಿದುದೇಕೆ ॥ ೭ ॥ ಕಾಡಮರ್ಕಟನಂತೆ ವಾಲಿಯು । ಹೇಡಿ
ತನದಿಂ ತಮ್ಮನರಸಿಯು । ಕೂಡಿದುದ ತಿಳಿದೀಹಿದೆನುತಲೆ । ರೂಢಿ
ಯೊಳಗೆ ॥ ೮ ॥ ಅನಿಬರಿರವಂತಿರಲಿ ಯೆನ್ನಯ ಜನಕನಹ ಖರನಾ
ಮಹಾತ್ಮನ । ಹನನಗೈದಿಹ ಮನುಜ ನೀನೆಂ । ದೆನುವದರಿತೆ ॥ ೯ ॥

॥ ಭಾಮಿನಿ ॥

ಪಿತನ ಕೊಂದಾ ಹಗೆಯದಲ್ಲದೆ । ಸತಿಯನೆಳದನ ಸೋದರಾದ್ಯರ ।
ಗತಿಗೆಡಿಸಿದಿಂತೆರಡು ವೈರದ ಶಿಖಿಯುರಿಗೆ ನಿನ್ನಾ ॥ ಹತಗಡಿಸಿ ತನಿರಕುತ
ಧಾರೆಯು । ನತಿಶಯದೊಳಾ ನೀವೆನೊಡು । ನ್ನತ ಶರಾಳಿಯ ಸತ್ವವೆಂ
ದೆನುತೆಚ್ಚ ರಾಘವನಾ ॥ ೧ ॥

॥ ವಾರ್ಧಿಕ್ಯ ॥

ಬರುವ ಕೂರ್ಗಣೆಗಳಂ ತರಿದು ರಾಘವನು ನಿಶಿ । ಚರನ ಕೋದಂಡ
ಮಂ ತರಿದಿಳುಹೆ ಧಾರುಣಿಗೆ । ಧರಿಸೆ ಪೊಸತೊಂದದರ ತರಿದನಿಂತೇ
ಳ್ನೂರು ವರಬಿಲ್ಗಳಂ ಮುರಿದನೂ ॥ ಮಾರಳಿ ಖರನಂದನನ ತುರಗ
ರಥಮಂ ನಿಳೆಗೆ । ಶರಮುಖದಿ ಕೆಡಹಲ್ಕೆ ಮರುಗಿ ಬಸವಳಿದು ಖರ ।
ತರಳನಿರೆ ಕಂಡು ಮನಕರಗಿ ಸಾರಥಿಯು ರಘುವರನ ನೀಕ್ಷಿಸುತೆಂದನೂ
॥ ೧ ॥

॥ ರಾಗ: ಅಷ್ಟ ॥

ವಲಿದು ಅ ಲಿಪುದೆನ್ನ ಮಾತಾ। ರಾಜ। ತಿಲಕ ನೀನ್ನೈಸೆ ಪ್ರಖ್ಯಾತಾ ॥
ಕಲಹಕಾತುರನಾಗಿ ಮಲತು ನಿನ್ನಿದಿರಾಗಿ। । ಇಳೆಯೊಳಗೆ ಬಸವಳಿದು
ಮಲಗಿದ । ಖಳಶಿರೋಮಣಿ ಬಳಲುತಳಲುತಾ ॥ ವಲಿದು ॥ ೧ ॥
ನಡುಗುವ ವನ ಸರ್ವಾಂಗ । ಕಾದ । ಲಿಡೆಯಿಲ್ಲ ರಥವಾಜಿಭಂಗ । ಪಿಡಿ
ವರೆ ಧನುವಿಲ್ಲ ನುಡಿವರೆ ಮತಿಯಿಲ್ಲ ॥ ತಡೆಯದೌಷಧಿ ತೊಡಿಸಿ ಬೇಗದಿ।

ನಡಸುವೆನು ದೃಢ ನುಡಿಯಿದ್ದೈ ಸಲೆ ॥ ೨ ॥ ಧನುಶರಾವಳಿ ರಥಸಹಿತಾ । ನಾನೇ । ಘನಜೇಗ ತರಿಸುವೆ ಧಿಟ ನಂಬು ನನ್ನಾ । ವಸದಿ ನಿರ್ಧರಿ ನೀಡೆನಗೆ ನೀಸಹಾಯವ ॥ ಚಿನುವಾಯನ ನೀನೆನಲು ಸೂತನ । ವಿನಯ ನುಡಿಗನುವೀಯೆ ರಘುಪತಿ ॥ ವಲಿದು ॥ ೩ ॥

॥ ಭಾಮಿನಿ ॥

ಕೇಳಿ ಸಾರಥಿ ಖರಕುಮಾರಗೆ । ಕೋಲನಗಿದಾ ಗಾಯಕಾಪದಿ ಹೂಳಿ ಕರದಲಿ ಮತ್ತೆ ಕಲಶೋದಕದ ಧಾರೆಗಳಾ ॥ ಯೇಳಿನುತ ಕಂಗಳಿಗೆ ಶಿದ್ದುತ । ಜೋಳವಿಸಲನಿತರೊಳು ಕಾಮರ್ಮುಕ । ತಾಳಿ ನಿಲಲಿಂತೆಂದ ರಘುಪತಿ ಖಳಗೆ ನೀತಿಗಳಾ ॥ ೧ ॥

॥ ರಾಗ: ಬೇಗಡೆ; ಅಷ್ಟ ॥

ಖರಸೂನು ಲಾಲಿಸಿ ಕೇಳೆನ್ನ ನುಡಿಯಾ । ಪರಮವಿಕ್ರಮಿ ನೀನೆಂದರಿತೆನು ಸೆಲೆಯಾ ॥ ಪ ॥ ಇನಿತು ಬಂದಸುರರ ವನಧಿಮಧ್ಯದಲಿ । ನಿನಗೆಣೆಯುವರಿಲ್ಲೆಂದೆನಬೇಕಿಂದಿನಲಿ । ಮನಕೆವತ್ಸರವಿಲ್ಲ ಗುಣಪೌರುಷದಲಿ । ಮನುಮಥಾರಿಯ ಸರಿಯೆನುವೆ ವೆಚ್ಚತಲಿ ॥ ೧ ॥ ಮತಿಹೀನರಾಗಿಹ ದಿತಿಜ ರಾವಣಸಾ । ಜತೆಯೊಳಿರ್ದರೆ ಮುಂ ಗತಿ ನಿನ್ನ ಪಿತಸಾ । ಹಿತವಿರೆ ನಿನಗೆ ನಾ ಕಥಿಸುವೆ ಸದನಾ । ಕ್ಷಿತಿಯೊಳುನ್ನತ ಕೀರ್ತಿ ಪಥವ ಕಾಣಿಸುವೆನಾ ॥ ಖರ ॥ ೨ ॥ ಶರಣವಿಭೀಷಣನರಿತಿಹ ತೆರದಿ । ಬರುವೆಯಾದರೆ ಮುಂದೆ ಪೊರೆಯುವೆ ಸ್ಥಿರದಿ । ಸೆರೆನಂಬುವೆಯ ಮಾತ ಮರುಳಾಗಿ ಮನದಿ । ಹರಣವಗೊಳದೆನ್ನ ಮರೆಹೊಗು ಭರದಿ ॥ ಖರ ॥ ೩ ॥

॥ ರಾಗ: ಭೈರವಿ; ಯೇಕ ॥

ಮರ್ತ್ಯರ ಪಾದದ್ವಯದಿ । ದಿತಿ । ಪುತ್ರರು ಮಣಿವರೆ ದಿಟದಿ । ಕ್ಷತ್ರಿಯ ನೀನಹೆ ಕುಲದಿ । ಭಯ । ವೆತ್ತಿತೆ ನಿನಗೀಹವದಿ ॥ ೧ ॥ ಮತಿಯುತ ನೀನೆಂದರಿತು । ಸಲೆ । ಹಿತನುಡಿಯಾಡಿದೆನಿನಿತು । ದಿತಿಜರೆ ದುರ್ಮದ ಜರೆತು । ಬಹ । ವ್ಯತಿಯರಿಯರು ದಿಟ ಮಾತು ॥ ೨ ॥ ಜನನ ಮರಣವೆಂತೆನುತಾ । ಲಿಹ । ಗುಣವಿದು ತಿಳಿದಿಹೆನಿನಿತಾ । ಮನುಜಗು ವಿಕ್ರಮರೆನುತಾ । ಭಯ । ದನುಜರಿಗಿಲ್ಲನವರತಾ ॥ ೩ ॥ ದನುಜರು

ಮಾಯಾವಿಗಳು । ಎಂ । ದಿನುವದನರಿಶಿಹೆ ಮೊದಲು । ದನುಜೆಯು ಮದ ದುಬ್ಬಿನೊಳು । ಬರ । ಲುಣಿಸಿದುದರಿಯೆ ಯು ಪೇಳು ॥ ೪ ॥ ಕೀರ್ತಿಯ ಸತಿ ಯುಂದಲೆಯು । ನೀ । ಚಿತ್ರದ ಕಾಣ ಹಗೆಯಾ । ದೈತ್ಯರ ಕುಲಕಲಿಕೆ ದಿಯಾ । ನೋ । ಡಿತ್ತಲು ಕಾಣಿಪೆ ಶೌರ್ಯ ॥ ೫ ॥

॥ ಭಾಮಿನಿ ॥

ಅಂದರೆಲೆ ಮಕರಾಕ್ಷ ನಿನ್ನನು । ಹೊಂದಿರುವ ತಾಮಸಗುಣವು ಬಿಡ । ದೆಂದಿಗಾದರು ಪೇಳ ಫಲವಿಲ್ಲೆನುತಲಾಕ್ಷಣದಿ ॥ ಸ್ಯಂದನದ ಸಾರ ಥಿಯ ಧನುಸಹಿ । ತೊಂದು ಬಾಣದೊಳಿಳುಹಲಾಖಳ । ನೊಂದು ಮನ ದಲಿ ಬಳಿಕ ಯೋಚಿಸುತೆಂದ ವಿಕ್ರಮದಿ ॥ ೧ ॥

॥ ರಾಗ: ಸೌರಾಷ್ಟ್ರ; ತ್ರಿವುಡೆ ॥

ಭಳಿರೆ ಸೀತಾಧವನೆ ನಿನ್ನಯ । ನೆಲೆಯನಾನರಿತಿರ್ಪೆನಂತ್ಮದ । ಕಲಹಕಾರಣನಾಗಿ ಬಂದಿಹೆ । ತಿಳಿದು ನೋಡೈ ॥ ೧ ॥ ಭೂತಳದಿ ದುರ್ನೀತಿಯುತರಹ । ಪಾಪಕರ್ಮಲಯವೆಸಗಿ ಜನ । ಪ್ರಾತರಕ್ಷಕನಾಗಿ ಮೆರೆದಿಹೆ । ನೋಡು ತಿಳಿಯೈ ॥ ೨ ॥ ಮರೆಹೊಗುವೆನಿಂದಿನಲಿ ನಿನ್ನಯ । ಪರಮಪಾವನಪದಸರೋಜನ । ನಿರತಸಲಹೆಂದೆನುತ ಶೂಲವ । ಭರ ದೊಳೆಚ್ಚಾ ॥ ೩ ॥ ಶೂಲಿ ಬ್ರಹ್ಮೇಂದ್ರಾದಿಸುರ ದಿ । ಕ್ಪಾಲಮುನಿಸಚ ರಾಚರಂಗಳ । ಪಾಲಸಿತ್ತೆಯು ಶೂಲವಂದಜ । ಕೋಲನೆಸೆದಾ ॥ ೪ ॥

॥ ಭಾಮಿನಿ ॥

ವಿಧಿಶರವು ಮಕರಾಕ್ಷನಿಟ್ಟಿರು । ವದಭುತದ ಶೂಲವನು ತರಿದಾ । ಮದಮುಖನ ಕಂಠವನು ಖಂಡಿಸಿ ತಲೆಯ ನಭಕಿಡಲೂ । ತ್ರಿದಶರತಿ ಸಂತೋಷದಿಂ ಮಿಗೆ । ಪದುಮನಾಭನ ಸಿರಿಮುಡಿಗೆನಲಿ । ದುಮದಧಿ ಘೋಷದಿ ಸುಮಮಳೆಯನಿಳಿಸಿದರು ಭಕ್ತಿಯೊಳು ॥ ೧ ॥

॥ ವಾರ್ಧಿಕ್ಯ ॥

ಕುಶನೆ ಕೇಳ್ ಬಳಿಕಲಾದಶಕಂಠನುಖ್ಯರಂದೆಸೆಗೆಡೆಸಿ ಶರಣಂಗೆ ವಸುಧೆಪಟ್ಟವನಿತ್ತು । ಬಸವಳಿದ ಸೀತೆಯಂ ನೊಶಗೊಳಿಸಿ ಸಹಜಸಹಿತೆ ಸಾಕೇತಕೈದಿ ॥ ಮುನಿ ಪೀಠವನೇರಿರಸೆಯ ಪಟ್ಟವನಾಂತು । ಕುಶಲದಿಂ

ಸೀತೆ ಸಹಿತೆಸದನೆಂಬುದಪರಿಶು । ನಸುನಗೆಯೊಳಾರತಿಯ ಬಿಸಜನೇತ್ರೆಯರು ನರ್ತಿಸುತೆತ್ತಿದರ್ ವಹಿಲದಿ ॥ ೧ ॥

॥ ರಾಗ: ಡವಳಾರ; ಯೇಕ ॥

ದಶರಥಸುತ ಶ್ರೀರಾಮನಿಗೆ । ದಶಗಳನನುಜನ ಪೊರದವಗೆ । ದಶಗಳ ವೈರಿಗೆ ಪಶುಪತಿಮಿತ್ರಗೆ । ವಸುಧೆಯ ಪುತ್ರಿಗೆ ಕುಶಲವ ತೋರ್ದಗೆ ॥ ನಸುನಗೆಯಲಿ ನರ್ತಿಸುತಲಿ ಸತಿಯರು ॥ ಕುಶಲದಾರತಿಯಾ ಬೆಳಗಿದರೂ ॥ ಶೋಭಾನೆ ॥ ೧ ॥ ಹನುಮನಳಾಂಗದ ವಂದ್ಯನಿಗೆ । ಇನಸುತ ಜಾಂಬವರಕ್ಷನಿಗೆ । ಮನುಮಥನಯ್ಯಗೆ ಮನುಮುನಿವಂದ್ಯಗೆ । ಜನಕಜೆಯರಸಗೆ ಮಿನುಗುವ ಸೀಕೆಗೆ ॥ ಘನಕುಚಭಾರದಿ ಕುಣಿಯುತ ಸತಿಯರು ॥ ಕನಕದಾರತಿಯಾ ಬೆಳಗಿದರು ॥ ಶೋಭಾನೆ ॥ ೨ ॥

॥ ರಾಗ: ಸೌರಾಷ್ಟ್ರ; ತ್ರಿವುಡೆ ॥

ಇಂತೆಸೆವ ಸತ್ಯಕಥೆಯನತಿ ಮುದ । ದಾಂತು ಕುಶಲವರಿಂಗೆ ವಲಿದು ಮ । ಹಂತಮುನಿ ವಾಲ್ಮೀಕಿ ಪೇಳಿದ । ನೆಂತೆನುವದಾ ॥ ೧ ॥ ಪೃಥ್ವಿಸುರ ಸುಬ್ರಾಯನೆಂಬನ । ಪುತ್ರನಾಗಿಹ ವಿಷ್ಣುಹರಿಪದ । ಭಕ್ತಿಯಲಿ ಬರದೀರ್ಪನೀಮಹ । ಸತ್ಯಕಥೆಯಾ ॥ ೨ ॥ ಪೃಥ್ವಿಯೊಳ ಗುರುಡೂರೆನುವ ಸು । ಕ್ಷೇತ್ರದೊಳು ರಂಜಿಪ ಮಹೇಶನ । ಮಿತ್ರನಹ ಮಹವಿಷ್ಣುಪಾದದೊ । ಳಿತ್ತೆ ಕೃತಿಯಾ ॥ ೩ ॥

॥ ಕಂದಪದ್ಯ ॥

ಕೃತಿಯಿದರಂ ಗೈದಿಹೆನು । ನ್ನತ ತಪ್ಪಿರಲತಿಶಯವೆಂದೆಣಿಸದೆ ಮಹ ।
ಮತಿಯುತರದರಂ ತಿದ್ದಿದ । ರತಿಹಿತ ವೈತ್ರಿಗೆ ಭಾಗಿಯಾಗಿಹೆ ನಿರತಂ ॥ ೧ ॥

॥ ಶುಭಮಸ್ತು ॥

॥ ಶ್ರೀ ಶಾರದಾಂಬಾಯೈ ನಮಃ ॥

Edited, Printed & Published by K. V. Shenoy
at The Prabhat Printers, Ltd., Mangalore.